# ಗೇಮ್ಸ್ ಫಾರ್ ಲ್ಯಾಂಗ್ವೇಜ್ ಲರ್ನಿಂಗ್ (ಭಾಷಾ ಕಲಿಕೆಗಾಗಿ ಆಟಗಳು)


## ವ್ರೈಟ್ ಎ., ಬೆಟ್ಟ್ರಿಡ್ಜ್ ಎಂ (2006).



ಕೇಂಬ್ರಿಡ್ಜ್ ಹ್ಯಾಂಡ್ ಬುಕ್ ಫಾರ್ ಲ್ಯಾಂಗ್ವೇಜ್ ಟೀಚರ್ಸ್ (ಭಾಷಾ ಶಿಕ್ಷಕರಿಗಾಗಿ ಕೇಂಬ್ರಿಡ್ಜ್ ಕೈಪಿಡಿ)
ಕೇಂಬ್ರಿಡ್ಜ್ ಯೂನಿವರ್ಸಿಟಿ ಪ್ರೆಸ್ (193 ಪುಟಗಳು)
ಮೊದಲ ಮುದ್ರಣ-1979
ISBN-13 978-0-521-15252-5


***

ಗೇಮ್ಸ್ ಫಾರ್ ಲ್ಯಾಂಗ್ವೇಜ್ ಲರ್ನಿಂಗ್ (ಭಾಷಾ ಕಲಿಕೆಗಾಗಿ ಆಟಗಳು) ಈ ಪುಸ್ತಕವು “ಕೇಂಬ್ರಿಡ್ಜ್ ಹ್ಯಾಂಡ್ ಬುಕ್ ಫಾರ್ ಲ್ಯಾಂಗ್ವೇಜ್ ಟೀಚರ್ಸ್ (ಭಾಷಾ ಶಿಕ್ಷಕರಿಗಾಗಿ ಕೇಂಬ್ರಿಡ್ಜ್ ಕೈಪಿಡಿ)” ಸರಣಿಯ ಭಾಗವಾಗಿದೆ. ಈ ಪುಸ್ತಕವು ವಿವಿಧ ರೀತಿಯ ಭಾಷಾ ಕಲಿಕಾ ಆಟಗಳನ್ನು ಹೊಂದಿದ್ದು, ಇವು ಮುಖ್ಯವಾಗಿ ಮೊದಲ ಹಾಗೂ ಮಧ್ಯಂತರ ಕಲಿಕಾ ಹಂತಗಳಲ್ಲಿರುವವರಿಗಾಗಿ ರೂಪಿಸಲಾಗಿದೆ. ಆದರೆ, ಕೆಲವು ಮಾಪಾಡುರ್ಗಳನ್ನು ಮಾಡಿಕೊಂಡು, ಈ ಆಟಗಳನ್ನು ಉನ್ನತ ತರಗತಿಗಳಲ್ಲಿರುವವರಿಗೆ, ಶಿಕ್ಷಕರಿಗೆ ಹಾಗೂ ವಿಭಿನ್ನ ಭಾಷಾ ತರಬೇತಿ ನೀಡುವ ಶಿಕ್ಷಕ ತರಬೇತಿದಾರರು ಸಹ ಬಳಸಿಕೊಳ್ಳಬಹುದಾಗಿದೆ.

ಈ ಪುಸಕ್ತವನ್ನು 8 ಭಾಗಗಳಾಗಿ ವಿಂಗಡಿಸಲಾಗಿದ್ದು, ಇದರಲ್ಲಿ ವಿವಿಧ ಮಾರ್ಪಾಡುಗಳನ್ನೂ ಒಳಗೊಂಡು 200 ಕ್ಕಿಂತ ಹೆಚ್ಚಿನ ಆಟಗಳಿವೆ. ಪ್ರತಿ ವಿಭಾಗದಲ್ಲೂ ಈ ಕೆಳಗಿನ ವರ್ಗಗಳಿಗೆ ಸೇರಿದ ಆಟಗಳಿವೆ: 1) ಮಾಡು: ಚಲಿಸು, ಮೂಕಾಭಿನಯ, ಚಿತ್ರ ಬಿಡಿಸು, ಅನುಸರಿಸು. 2) ಗುರುತಿಸು: ಬೇರ್ಪಡಿಸು/ ವಿಂಗಡಿಸು, ಊಹಿಸು, ಕಲ್ಪಿಸು 3) ವಿವರಿಸು 4) ಜೋಡಿಸು: ಹೋಲಿಸು, ಹೊಂದಿಸು ಗುಂಪಾಗಿಸು. 5) ಕ್ರಮಾನುಗತಗೊಳಿಸು 6) ನೆನಪಿಸು ಹಾಗೂ 7) ರಚಿಸು/ಸೃಷ್ಟಿಸು. ಪ್ರತಿಯೊಬ್ಬ ಕಲಿಯುವ ವ್ಯಕ್ತಿಯು ತನ್ನದೇ ರೀತಿಯಲ್ಲಿ ಕಲಿಯುತ್ತಾನೆ/ಳೆ ಎಂಬ ಸಂಗತಿಯನ್ನು ಮನಸ್ಸಿನಲ್ಲಿಟ್ಟುಕೊಂಡು ಈ ವಿಭಾಗಗಳನ್ನು ಮಾಡಲಾಗಿದೆ. ಕೆಲವರಿಗೆ ದೃಶ್ಯಗಳು ಇಲ್ಲವೆ ಚಿತ್ರಗಳನ್ನು ಒಳಗೊಂಡಂತಹ ಆಟಗಳೆಂದರೆ ಇಷ್ಟವಾಗುತ್ತದೆ, ಇನ್ನೂ ಕೆಲವರು ಹೊರಗೆ ಹೋಗಿ ತಾವೇ ಮಾಡುವಂತಹ

ಕ್ರಿಯೆಗಳನ್ನುಳ್ಳ ಆಟಗಳಿಗೆ ಉತ್ತಮವಾಗಿ ಪ್ರತಿಕ್ರಿಯಿಸಬಹುದು. ಹಾಗೆಯೇ ಕೆಲವರು ಜೊತೆಯಾಗಿ, ಇನ್ನೂ ಕೆಲವರು ಗುಂಪಲ್ಲಿ ಇಲ್ಲವೆ ಪ್ರತ್ಯೇಕವಾಗಿ ಕೆಲಸ ಮಾಡಲು ಇಷ್ಟಪಡಬಹುದು. ಹೀಗೆ ಕಲಿಯುವವರ ಹಾಗೂ ಶಿಕ್ಷಕರ ಇಂತಹ ಎಲ್ಲಾ ಆಸಕ್ತಿಗಳನ್ನು ಒಳಗೊಳ್ಳುವ ಆಟಗಳು ಈ ಪುಸ್ತಕದಲ್ಲಿವೆ.

ಪ್ರತಿಯೊಂದು ವಿಭಾಗವು ಸಣ್ಣದೊಂದು ಪರಿಚಯದೊಂದಿಗೆ ಪ್ರಾರಂಭವಾಗುತ್ತದೆ, ಅದರೊಡನೆ ಆಟಗಳ ವಿವರಗಳಾದ ಆಟದ ಹೆಸರು, ವಿಧಗಳು, ಗುರಿಗಳು, ಅದಕ್ಕೆ ಬೇಕಾದ ತಯಾರಿ ಹಾಗೂ ಕೊನೆಗೆ ವಿಧಾನವನ್ನು ನೀಡಲಾಗಿದೆ. ಇದಲ್ಲದೆ ಆಟಗಳನ್ನು ಸರಿಯಾಗಿ ಅರಿತು, ಉತ್ತಮ ರೀತಿಯಲ್ಲಿ ನಿರ್ವಹಿಸಲು ಬೇಕಾಗುವ ಉದಾಹರಣೆಗಳು ಹಾಗೂ ದೃಷ್ಟಾಂತಗಳನ್ನೂ ಸಹ ನೀಡಲಾಗಿದೆ.

ಪ್ರತಿ ವಿಭಾಗದ ಶೀರ್ಷಿಕೆಯು ಆ ವಿಭಾಗದಡಿಯಲ್ಲಿ ಬರುವಂತಹ ಆಟಗಳ ಬಗ್ಗೆ ಒಂದು ಕಲ್ಪನೆಯನ್ನು ನಮಗೆ ನೀಡುತ್ತದೆ. ಉದಾಹರಣೆಗೆ, ಮೊದಲ ಅಧ್ಯಾಯವು ಐಸ್ ಬ್ರೇಕರ್ಸ್ ಅಂಡ್ ವಾರ್ಮರ್ಸ್ ಅಂದರೆ ಪರಿಚಯಾತ್ಮಕ ಹಾಗೂ ಹೊಸತನದ ಮುಜುಗರವನ್ನು ಹೋಗಲಾಡಿಸಲು ಉಪಯೋಗಿಸಬಹುದಾದ ಆಟಗಳನ್ನು ಹೊಸ ಗುಂಪು ಇಲ್ಲವೆ ತರಗತಿಯಲ್ಲಿ ಅಥವಾ ಪರಸ್ಪರ ಪರಿಚಯ ಮಾಡಿಕೊಳ್ಳುವಂತಹ ಸಂದರ್ಭಗಳಲ್ಲಿ ಬಳಸಬಹುದು. ಈ ಆಟಗಳು ತರಬೇತಿಯಲ್ಲಿ ಭಾಗವಹಿಸುವವರು ಪರಸ್ಪರ ಒಡನಾಡುವ, ಪರಿಚಯಿಸಿಕೊಳ್ಳುವ ಅವಕಾಶಗಳನ್ನು ಸೃಷ್ಟಿಸುತ್ತದೆ. ಇದರಲ್ಲಿ ಪಾಠದ ಮೊದಲು ಆಡಬಹುದಾದ ಆಟಗಳು ಸಹ ಇವೆ. ಅಧ್ಯಾಯ 2, 3 4, ಹಾಗೂ 5 ನಿರ್ದಿಷ್ಟವಾಗಿ ನಾಲ್ಕು ಭಾಷಾ ಕೌಶಲಗಳಾದ- ಮಾತನಾಡುವುದು, ಆಲಿಸುವುದು, ಬರೆಯುವುದು ಹಾಗೂ ಓದುವುದರ ಕುರಿತದ್ದಾಗಿವೆ. ಐದೂ ಅಧ್ಯಾಯಗಳಲ್ಲಿ ಇರುವಂತಹ ಆಟಗಳು ಈ ನಾಲ್ಕೂ ಭಾಷಾ ಕೌಶಲಗಳು ಹೇಗೆ ಪರಸ್ಪರ ನಿಕಟವಾದ ಅಂತರ್ ಸಂಬಂಧವನ್ನು ಹೊಂದಿದೆ ಎಂದು ತೋರಿಸುತ್ತದೆ. ಹೀಗಾಗಿ ತರಗತಿಯಲ್ಲಿ ಮಕ್ಕಳಿಗೆ ಈ ಕೌಶಲಗಳನ್ನು ಬೆಳೆಸಲು ಕಲಿಸುವಾಗ ಇವುಗಳನ್ನು ಪ್ರತ್ಯೇಕವಾದ ಅಂಶಗಳಂತೆ ನೋಡಬಾರದು. ಇದರಂತೆ, ಕೆಲವು ಆಟಗಳ ಮೂಲಭೂತ ವಿಷಯ ಮೇಲೆ ತಿಳಿಸಿರುವ ಭಾಷಾ ಕೌಶಲಗಳಲ್ಲಿ ಒಂದನ್ನು ಕುರಿತದ್ದಾದರೂ, ವ್ಯಾಕರಣ ಅಥವಾ ಕತೆಯ ಅಂಶಗಳನ್ನು ಅರ್ಥ ಮಾಡಿಕೊಳ್ಳಬೇಕಾದ ಸಾಮರ್ಥ್ಯವನ್ನು ಬೆಳೆಸಲು ಸಹಾಯಕವಾಗಿದೆ. ಉದಾಹರಣೆಗೆ, “ಸ್ಟೋರೀಸ್ ವಿಥ್ 10 ಪಿಕ್ಚರ್ಸ್ (10

ಚಿತ್ರಗಳಿರುವ ಕತೆ) ಎಂಬ ಆಟದಲ್ಲಿ, ವಿದ್ಯಾರ್ಥಿಯು ಕತೆಯನ್ನು ಭೂತ ಕಾಲದಲ್ಲಿ ಹೇಳಿ, ಅದನ್ನಾಧರಿಸಿ ಪ್ರಶ್ನೆಗಳನ್ನು ರಚಿಸಬೇಕು (ಪುಟ 39).

ಅಧ್ಯಾಯ 6ರ ಶೀರ್ಷಿಕೆ 'ಒಕ್ಯಾಬುಲರಿ ಹಾಗೂ ಸ್ಪೆಲ್ಲಿಂಗ್' (ಶಬ್ದಭಂಡಾರ ಹಾಗೂ ಕಾಗುಣಿತ). ಈ ಅಧ್ಯಾಯವು 'ವಿದ್ಯಾರ್ಥಿಗಳು ಪದಗಳನ್ನು ತಮಗೆ ಬೇಕಾದ ಉದ್ದೇಶವನ್ನಾಧರಿಸಿ ಸಂದರ್ಭವೊಂದರಲ್ಲಿ ಉಪಯೋಗಿಸಲು ಸಹಾಯ ಮಾಡುವುದಾಗಿದೆ'(ಪುಟ 94). ಇದರಲ್ಲಿ 'ವರ್ಡ್ ವೆಬ್' (ಪದಗಳ ಜಾಲ), 'ವರ್ಡ್ ಅಸೋಸಿಯೇಷನ್' (ಪದ ಕೂಡಿಕೆ), 'ನೇಮಿಂಗ್ ಗೇಮ್ಸ್' (ಹೆಸರಿಡುವ ಆಟ), 'ಆಡ್ ಒನ್ ಔಟ್' (ಗುಂಪಿಗೆ ಸೇರದಿರುವುದನ್ನು ಹೊರಗಿಡಿ) ಮುಂತಾದ ಆಟಗಳಿವೆ. ಇಲ್ಲಿ ನೀಡಿರುವ ಕೆಲವು ಆಟಗಳು ಓದುಗರಿಗೆ ಈಗಾಗಲೇ ತಿಳಿದಿರಬಹುದು, ಆದರೆ ಪ್ರತಿ ವಿಭಾಗದ ಅಡಿಯಲ್ಲಿನ ಆಟಗಳಿಗೆ ಕೆಲವು ಬದಲಾವಣೆಗಳನ್ನು ಮಾಡಿಕೊಂಡು ತರಗತಿಯಲ್ಲಿ ಉಪಯೋಗಿಸಬಹುದು. ಮುಂದಿನ ಭಾಗವು ವ್ಯಾಕರಣ ಕುರಿತದ್ದಾಗಿದ್ದು, ಇದರಡಿಯಲ್ಲಿ ಬರುವ ಆಟಗಳು ಭಾಷೆಯನ್ನು ವಿಶ್ಲೇಷಿಸಿ ಅದರ ಅಂಶಗಳನ್ನು ದುಡಿಸಿಕೊಳ್ಳುವ ಕೆಲಸವನ್ನು ವಿದ್ಯಾರ್ಥಿಗಳಿಂದ ನಿರೀಕ್ಷಿಸುತ್ತದೆ. ಈ ವಿಭಾಗದಲ್ಲಿ 25 ಆಟಗಳಿದ್ದು, ಹಲವಾರು ಬದಲಾವಣೆಗಳೊಂದಿಗೆ ಅವುಗಳನ್ನು ಆಡಬಹುದು. ಈ ಆಟಗಳು ವ್ಯಾಕರಣದ ವಿಷಯಗಳಾದ ಕಾಲದ ಬಳಕೆ, ವಾಕ್ಯದ ಭಾಗಗಳು, ಯಾರು, ಯಾಕೆ ಅಂತಹ (wh ಪ್ರಶ್ನೆಗಳು) ಪ್ರಶ್ನೆಗಳನ್ನು ಬಳಸುವುದು ಇತ್ಯಾದಿ ವಿಚಾರಗಳನ್ನು ಹೊಂದಿವೆ. ಅಧ್ಯಾಯ 8ರಲ್ಲಿರುವ ಆಟಗಳು ಈಗಾಗಲೆ ಕಲಿತದ್ದನ್ನು ವಿದ್ಯಾರ್ಥಿಯು ಅಭ್ಯಾಸ ಮಾಡಿಕೊಳ್ಳಲು, ಪುನರಾವರ್ತನೆ ಹಾಗೂ ನೆನಪಿಸಿಕೊಳ್ಳಲು ಸ್ವತಂತ್ರವಾಗಿ ಬಳಸಬಹುದಾಗಿದೆ. ಇದರಲ್ಲಿ ಮಡಚಬಹುದಾದ ಶಬ್ದಸೂಚಿ ಪುಸ್ತಕಗಳು, ಕಾರ್ಡುಗಳನ್ನು ಮಾಡುವುದು ಇತ್ಯಾದಿ ಆಟಗಳಿವೆ. ಈಗಾಗಲೇ ಕಲಿತದ್ದನ್ನು ಪುನರಾವರ್ತಿಸಿಕೊಳ್ಳಲು ಹಾಗೂ ನೆನಪಿಸಿಕೊಳ್ಳಲು ಸಹ ಆಟಗಳಿವೆ. ಇದರಲ್ಲಿ 'ಮೇಕಿಂಗ್ ಅ ಮೈಂಡ್ ಮ್ಯಾಪ್' (ಮನೊ ನಕ್ಷೆಯನ್ನು ಮಾಡಿಕೊಳ್ಳುವುದು), 'ಮೇಕಿಂಗ್ ಅ ವರ್ಡ್ ಸನ್' (ಪದಗಳ ಸೂಚಿಯನ್ನು ರಚಿಸಿಕೊಳ್ಳುವುದು), 'ಆಡಿಂಗ್ ವರ್ಡ್ಸ್' (ಪದಗಳನ್ನು ಸೇರಿಸುವುದು) ಎಂಬ ಆಟಗಳು ಸದ್ಯ ಪಟ್ಟಿ ಮಾಡಲಾಗಿರುವ ವಿಷಯಗಳಿಗೆ ಸಂಬಂಧಿಸಿದ ಪದಗಳ ಮೇಲೆ ಆಧರಿಸಲಾಗಿದೆ.

ಒಟ್ಟಾರೆ, ಗೇಮ್ಸ್ ಫಾರ್ ಲ್ಯಾಂಗ್ವೇಜ್ ಲರ್ನಿಂಗ್ (ಭಾಷಾ ಕಲಿಕೆಗಾಗಿ ಆಟಗಳು) 193 ಪುಟಗಳಿರುವ ಪುಟ್ಟದಾದ ಉಪಯೋಗಕಾರಿ ಪುಸ್ತಕವಾಗಿದೆ. ಮೊದಲೇ ಹೇಳಿದಂತೆ ಈ ಪುಸ್ತಕವನ್ನು ವಿದ್ಯಾರ್ಥಿಗಳು ಹಾಗೂ ವಿವಿಧ ಭಾಷಾ ತರಬೇತಿಗಳಿಗೆ ಬರುವ

ಶಿಕ್ಷಕರಿಗಾಗಿ ಉಪಯೋಗಿಸಬಹುದು. ಆಟಗಳು ಅರ್ಥಪೂರ್ಣವಾಗಿದ್ದು, ಆಸಕ್ತಿದಾಯಕವೂ ಆಗಿವೆ, ಕೆಲವು ಬದಲಾವಣೆಗಳನ್ನು ಮಾಡಿಕೊಂಡು ವಿಭಿನ್ನ ಹಂತಗಳಲ್ಲಿ ವಿವಿಧ ಭಾಷೆಗಳನ್ನು ಕಲಿಸಲು ಈ ಆಟಗಳನ್ನು ಬಳಸಬಹುದು. ಆದರೆ, ಇದು ಸಾಧ್ಯವಾಗಬೇಕಾದರೆ, ಶಿಕ್ಷಕರಿಗೆ ಭಾಷೆಯ ಒಟ್ಟಾರೆ ಗ್ರಹಿಕೆ ಅವಶ್ಯಕ, ಕಾರಣ ಅವರು ಈ ಆಟಗಳನ್ನು ತರಗತಿಯಲ್ಲಿ ಹೇಗೆ ಬಳಸಬೇಕೊ ಆ ರೀತಿಯಲ್ಲಿ ಬಳಸಿ ಅದರಾಚೆಗೂ ಬೋಧನೆಯನ್ನು ಮುಂದುವರಿಸಬೇಕಾಗುತ್ತದೆ.

**ರಜನಿ ದ್ವಿವೇದಿ** ಅವರಿಗೆ ಭಾಷೆ ಹಾಗೂ ಭಾಷಾ ಬೋಧನೆಯಲ್ಲಿ ಬಹಳ ಆಸಕ್ತಿ . ಅವರು ಪ್ರಸ್ತುತ ಉದಯಪುರದಲ್ಲಿರುವ ವಿಧ್ಯಾಭವನ ಎಜುಕೇಶನ್ ರಿಸೋರ್ಸ್ ಸೆಂಟರ್ನಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾರೆ

***

**ಚಿಂತನಾತ್ಮಕ ಪ್ರಶ್ನೆಗಳು**

1. ಗೇಮ್ಸ್ ಫಾರ್ ಲ್ಯಾಂಗ್ವೇಜ್ ಲರ್ನಿಂಗ್ (ಭಾಷಾ ಕಲಿಕೆಗಾಗಿ ಆಟಗಳು) ಪುಸ್ತಕವನ್ನು ಯಾರಿಗೆ ಉದ್ದೇಶಿಸಿ ರೂಪಿಸಲಾಗಿದೆ?
2. ಗೇಮ್ಸ್ ಫಾರ್ ಲ್ಯಾಂಗ್ವೇಜ್ ಲರ್ನಿಂಗ್ (ಭಾಷಾ ಕಲಿಕೆಗಾಗಿ ಆಟಗಳು) ಪುಸ್ತಕದಲ್ಲಿ ನೀಡಿರುವ ಆಟಗಳನ್ನು ಭಾಷೆಯ ಯಾವ ವಿಚಾರಗಳನ್ನು ವಿದ್ಯಾರ್ಥಿಗಳಿಗೆ ಮುಟ್ಟಿಸಲು ಯೋಜಿಸಲಾಗಿದೆ?
3. ಭಾಷಾ ಕಲಿಕೆಯಲ್ಲಿ ಆಟಗಳನ್ನು ಬಳಸುವ ನಿಮ್ಮ ಅನುಭವವನ್ನು ತಿಳಿಸಿ.
4. ಆಟಗಳ ಮೂಲಕ ಭಾಷೆ ಕಲಿಸುವುದು ಹೆಚ್ಚು ಪರಿಣಾಮಕಾರಿಯೇ? ವಿಚಾರಮಾಡಿ.

**ಅನುವಾದಕರು**- ಉಷಾ ಬಿ. ಎನ್. **ಪರಿಶೀಲನೆ:** ನಾಗಮಣಿ ಎಸ್. ಎನ್.

**ಮೂಲ** - *Language and Language Teaching* Volume 4 Number 2 Issue 8 July 2015